ತಡೂದಿ ಗಣಿತೆ ಅತಂತ್ರ
13/9/2021

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 113(127) |
| ಸದಸ್ಯರ ಹೆಸರು | : | ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 13/09/2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪದವಿ ಪೂರ್ವ ಶಿಕ್ಷಣ ವೃತ್ತಿ ಶಿಕ್ಷಣ (JOC) ಕೋರ್ಸ್‌ಗಳು ಯಾವಾಗ ಪ್ರಾರಂಭವಾಗಿವೆ ಮತ್ತು ಯಾವಾಗ ರದ್ದುಪಡಿಸಲಾಯಿತು; | ವೃತ್ತಿ ಶಿಕ್ಷಣ ಕೋರ್ಸುಗಳನ್ನು 1977ರಲ್ಲಿ ಪ್ರಾರಂಭಿಸಲಾಯಿತು ಹಾಗೂ 2010-11ನೇ ಸಾಲಿನಲ್ಲಿ ರದ್ದು ಪಡಿಸಲಾಯಿತು. |
| ಆ) | ಅಲ್ಲಿ ಕೆಲಸ ನಿರ್ವಹಿಸುತ್ತಿದ್ದ ಸಿಬ್ಬಂದಿಗಳ ಸಂಖ್ಯೆ ಎಷ್ಟು; ಇವರ ಸೇವೆಯನ್ನು ವಿವಿಧ ಇಲಾಖೆಗಳಲ್ಲಿ ಯಾವಾಗ ವಿಲೀನಗೊಳಿಸಲಾಯಿತು; | ವೃತ್ತಿ ಶಿಕ್ಷಣ ಇಲಾಖೆಯಲ್ಲಿ ಒಟ್ಟು 3746 ಅರೆಕಾಲಿಕ ಬೋಧಕ / ಬೋಧಕೇತರ ಸಿಬ್ಬಂದಿಯವರು ಕೆಲಸ ನಿರ್ವಹಿಸುತ್ತಿದ್ದು, ವಿಲೀನ ವಿಧೇಯಕ-2011ರನ್ವಯ ವಿಲೀನಕ್ಕೆ ಅರ್ಹರಿದ್ದ 2931 ಸಿಬ್ಬಂದಿಯವರನ್ನು 2012 ರಿಂದ 2018ರ ಅವಧಿಯಲ್ಲಿ ವಿವಿಧ ಇಲಾಖೆಗಳಲ್ಲಿ ವಿಲೀನಗೊಳಿಸಲಾಯಿತು. |
| ಇ) | ಇವರು ಖಾಯಂ ಪೂರ್ವ ಸೇವೆಯನ್ನು ಪರಿಗಣಿಸದಿರುವುದರಿಂದ, ಇವರಿಗೆ ನಿಶ್ಚಿತ ಪಿಂಚಣಿ ಸೌಲಭ್ಯ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |

| | | |
|---|---|---|
| ಈ | ವಿಧೇಯಕಕ್ಕೆ ತಿದ್ದುಪಡಿ ತಂದು, ಈ ಸಿಬ್ಬಂದಿಗಳ ಖಾಯಂ ಪೂರ್ವ ಸೇವೆಯನ್ನು ಪರಿಗಣಿಸಿ ನಿಶ್ಚಿತ ಪಿಂಚಣಿ ನೀಡಲು ಸರ್ಕಾರ ಕ್ರಮವಹಿಸಬಾರದೇಕೇ? | 1. ಮಾನ್ಯ ಸುಪ್ರೀಂಕೋರ್ಟ್ ನ್ಯಾಯಾಲಯದ ಅಪೀಲು (ಸಿವಿಲ್) 3595-3612 of 1999 ದಿನಾಂಕ:10.04.2006ರ ರಾಜ್ಯ ಸರ್ಕಾರ ಮತ್ತು ಇತರರು ವಿರುದ್ಧ ಉಮಾದೇವಿ ಮತ್ತು ಇತರರು ಪ್ರಕರಣದಲ್ಲಿ ಒಂದು ಬಾರಿ ಕ್ರಮವಾಗಿ ಕ್ರಮಬದ್ಧಗೊಳಿಸಲು ಅವಕಾಶ ನೀಡಿ ಆದೇಶಿಸಿದ್ದು, ಕ್ರಮಬದ್ಧಗೊಳಿಸುವಿಕೆಯನ್ನು ಪುನರಾವರ್ತಿಯಾಗಿ ಅವಕಾಶವಿರುವುದಿಲ್ಲವೆಂದು ಸ್ಪಷ್ಟಪಡಿಸಿರುವುದರಿಂದ, ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ವಿಧೇಯಕ-2011ನ್ನು ಮತ್ತೆ ತಿದ್ದುಪಡಿ ಮಾಡಲು ಅವಕಾಶವಿರುವುದಿಲ್ಲ.<br>2. ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸ್‌ಗಳ ನೌಕರರನ್ನು ವಿಲೀನಗೊಳಿಸುವ ಅಧಿನಿಯಮ, 2011ರ ಅಡಿಯಲ್ಲಿ ಆತನ ಪ್ರಾರಂಭಿಕ ಮೂಲ ವೇತನವನ್ನು, ಆತನು ವಿಲೀನಗೊಂಡ ಹುದ್ದೆಯ ಪ್ರವರ್ಗದ ಕಾಲಿಕ ವೇತನ ಶ್ರೇಣಿಯ ಕನಿಷ್ಟಕ್ಕೆ ನಿಗಧಿಗೂಳಿಸತಕ್ಕದ್ದು ಹಾಗೂ ತನ್ನ ವಿಲೀನಕ್ಕೆ ಮೊದಲು ಸಲ್ಲಿಸಿದ ಸೇವೆಯನ್ನು ವೇತನ, ಜೇಷ್ಠತೆ ಹಾಗೂ ರಜೆ ಅಥವಾ ಪಿಂಚಣಿಗೆ ಸಂಬಂಧಿಸಿದಂತೆ ಲೆಕ್ಕಕ್ಕೆ ತೆಗದುಕೊಳ್ಳತಕ್ಕದಲ್ಲ ಎಂಬ ಷರತ್ತನ್ನು ವಿಧೇಯಕದಲ್ಲಿ ವಿಧಿಸಲಾಗಿದೆ. ಅಲ್ಲದೆ, ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರುಗಳನ್ನು ವಿಲೀನಗೊಳಿಸುವ ಅಧಿನಿಯಮ |

| | | |
|---|---|---|
| | | 2011ರ ನಿಯಮ-3ರಲ್ಲಿ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರುಗಳನ್ನು ಒಂದು ಸಲದ ಕ್ರಮವಾಗಿ ವಿಲೀನಗೊಳಿಸಲು ಪರಿಗಣಿಸಿರುವುದರಿಂದ ಹಾಗೂ ಖಾಯಂ ಪೂರ್ವ ಸೇವೆಯನ್ನು ಪಿಂಚಣಿ ಉದ್ದೇಶಕ್ಕೆ ಪರಿಗಣಿಸದಿರುವುದರಿಂದ ಖಾಯಂಪೂರ್ವ ಸೇವೆಯನ್ನು ಪರಿಗಣಿಸಿ, ಪಿಂಚಣಿ ನೀಡಲು ಅವಕಾಶವಿರುವುದಿಲ್ಲ. |

**ಸಂಖ್ಯೆ: ಇಪಿ 39 ಟಿವಿಇ 2021**

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು